**ಕರ್ನಾಟಕ ವಿಧಾನ ಪರಿಷತ್ತು**

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1397 |
| 2 | ಸದಸ್ಯರ ಹೆಸರು | : | ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) |
| 3 | ಉತ್ತರಿಸುವ ದಿನಾಂಕ | : | 23-09-2021 |
| 4 | ಉತ್ತರಿಸುವವರು | : | ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ಮಿಷನ್-2022 ಯೋಜನೆಯ ಅಂಗವಾಗಿ ಎಷ್ಟು ಅನುದಾನವನ್ನು ಸರ್ಕಾರದಿಂದ ಇಲ್ಲಿಯವರೆಗೆ ಬಿಡುಗಡೆ ಮಾಡಲಾಗಿದೆ (ವಿವರ ನೀಡುವುದು) | ಭಾರತದ ಸ್ವಾತಂತ್ರ್ಯದ 75ನೇ ವರ್ಷಾಚರಣೆಯ ಸುಸಂದರ್ಭದಲ್ಲಿ ಮುಂದಿನ 2 ವರ್ಷಗಳಲ್ಲಿ ಅನುಷ್ಠಾನಗೊಳಿಸುವ ಗುರಿಯೊಂದಿಗೆ **"ಬೆಂಗಳೂರು ಮಿಷನ್ 2022-ಬೆಂಗಳೂರಿಗೆ ನವಚೈತನ್ಯ"** ಕಾರ್ಯಕ್ರಮವನ್ನು ಬೆಂಗಳೂರಿನ ಸಮಗ್ರ ಅಭಿವೃದ್ಧಿಗಾಗಿ ರೂಪಿಸಲಾಗಿದೆ.<br><br>ಸರ್ಕಾರದ ಆದೇಶ ಸಂಖ್ಯೆ: ನಅಇ 259 ಎಂಎನ್‌ವೈ 2020, ದಿನಾಂಕ: 21.12.2020 ರಲ್ಲಿ ಈ ಕೆಳಕಂಡ ಪ್ರಮುಖ ನಾಲ್ಕು ಮುಖ್ಯಾಂಶಗಳನ್ನು ಒಳಗೊಂಡಿರುತ್ತದೆ.<br>1. ಸುಗಮ ಸಂಚಾರ<br>2. ಸ್ವಚ್ಛ ಬೆಂಗಳೂರು<br>3. ಹಸಿರು ಬೆಂಗಳೂರು<br>4. ಜನ ಸಂಪರ್ಕ<br><br>ಮೇಲ್ಕಂಡ ನಾಲ್ಕು ಪ್ರಮುಖ ಅಂಶಗಳಲ್ಲಿ ಒಳಗೊಂಡಿರುವ ಕ್ರಮ ಸಂಖ್ಯೆ: 3 ರ **"ಹಸಿರು ಬೆಂಗಳೂರು" ರ ಜಲಮೂಲಗಳ ಸಂರಕ್ಷಣೆ ಅಡಿಯಲ್ಲಿ-** ಜಲಮಾರ್ಗ ಸೌಂದರ್ಯ ವರ್ಧನೆ: ಕೆ-100 ರಾಜಕಾಲುವೆ ಅಭಿವೃದ್ಧಿ ಯೋಜನೆ ಕಾರ್ಯಕ್ರಮವನ್ನು ನಿರ್ವಹಿಸಲಾಗುತ್ತಿದೆ. ಸದರಿ ಕಾರ್ಯಕ್ರಮಕ್ಕೆ ಸರ್ಕಾರದ ಆದೇಶ ಸಂಖ್ಯೆ: ನಅಇ 229 ಎಂಎನ್‌ವೈ 2020 (ಭಾಗ-1) ದಿನಾಂಕ: 31-12-2020 ರಲ್ಲಿ **ರೂ.169.00 ಕೋಟಿಗಳ** ಅಂದಾಜು ಮೊತ್ತಕ್ಕೆ ಅನುಮೋದನೆ ನೀಡಲಾಗಿರುತ್ತದೆ. ಸದರಿ ಕಾಮಗಾರಿಗೆ ಇದುವರೆವಿಗೂ **ರೂ.20.44 ಕೋಟಿಗಳ** ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. |
| ಆ | ಸದರಿ ಯೋಜನೆಯಡಿಯಲ್ಲಿ ಅನುಮೋದಿತ ಕ್ರಿಯಾ ಯೋಜನೆಯ ಪ್ರತಿಯನ್ನು ಒದಗಿಸುವುದು. | ಸರ್ಕಾರದ ಆದೇಶ ಸಂಖ್ಯೆ: ನಅಇ 259 ಎಂಎನ್‌ವೈ 2020, ದಿನಾಂಕ: 21.12.2020ರಲ್ಲಿ **"ಬೆಂಗಳೂರು ಮಿಷನ್ 2022-ಬೆಂಗಳೂರಿಗೆ ನವಚೈತನ್ಯ"** ಯೋಜನೆಯಲ್ಲಿ ಕೆಳಕಂಡ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ಸರ್ಕಾರದ ಆದೇಶದ ಪ್ರತಿಯನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ.<br>**1. ಸುಗಮ ಸಂಚಾರ:**<br>ಬೆಂಗಳೂರಿಗೆ ಅತ್ಯಾಧುನಿಕ ಸಾರಿಗೆ ವ್ಯವಸ್ಥೆ ಕಲ್ಪಿಸುವುದು. |

| | | |
|---|---|---|
| | | ಅ) ಅತ್ಯುತ್ತಮ ಮುಖ್ಯರಸ್ತೆಗಳು.<br>1. ಒಟ್ಟು 190 ಕಿ.ಮೀ ಉದ್ದದ 12 ಹೆಚ್ಚಿನ ವಾಹನದಟ್ಟಣೆ ಹೊಂದಿರುವ (High Density Corridor) ರಸ್ತೆಗಳನ್ನು ಕೆಆರ್‌ಡಿಸಿಎಲ್ ಮೂಲಕ ಅಭಿವೃದ್ಧಿ.<br>2. ಸ್ಮಾರ್ಟ್ ಸಿಟಿ ರಸ್ತೆ ಕಾಮಗಾರಿಗಳನ್ನು ತ್ವರಿತವಾಗಿ ಪೂರ್ಣ ಗೊಳಿಸುವುದು.<br>3. ಒಟ್ಟು 400 ಕಿ.ಮೀ ಉದ್ದದ ಪ್ರಮುಖ ಆರ್ಟೀರಿಯಲ್ ರಸ್ತೆಗಳ ವಾರ್ಷಿಕ ನಿರ್ವಹಣಾ ಒಪ್ಪಂದ.<br>4. ಕರ್ಬ್ ಸ್ಟೋನ್ ಪೇಂಟಿಂಗ್ ಮತ್ತು ಲೇನ್ ಮಾರ್ಕಿಂಗ್ ಮೂಲಕ ರಸ್ತೆ ಸೌಂದರ್ಯ ವೃದ್ಧಿ.<br>5. ಸಮನ್ವಯ ಹೊಂದಿದ ಟ್ರಾಫಿಕ್ ಸಿಗ್ನಲ್ ದೀಪಗಳ ಸ್ಥಾಪನೆ ಮಾಡುವುದು.<br>ಆ) ಸ್ಮಾರ್ಟ್ ಸಂಚಾರ<br>1. ವಿದ್ಯುತ್ ಚಾಲಿತ ಸಮೂಹ ಸಾರಿಗೆ ವ್ಯವಸ್ಥೆ ಬಳಕೆಗೆ ಉತ್ತೇಜನ.<br>2. ವೇಗವಾಗಿ ಮೆಟ್ರೋ ಕಾಮಗಾರಿಯನ್ನು ಪೂರ್ಣಗೊಳಿಸುವುದು.<br>3. ಬಸ್ ಆದ್ಯತಾ ಪಥ ವ್ಯವಸ್ಥೆಯ ವಿಸ್ತರಣೆ.<br>4. ಮಾಲಿನ್ಯ ಮತ್ತು ಟ್ರಾಫಿಕ್ ಕಡಿಮೆ ಮಾಡಲು ಉಪನಗರ ರೈಲುಗಳ ಕಾರ್ಯಾಚರಣೆ.<br>**II. ಸ್ವಚ್ಛ ಬೆಂಗಳೂರು:**<br>ತ್ಯಾಜ್ಯ ನಿರ್ವಹಣೆಯಲ್ಲಿ ಬೆಂಗಳೂರನ್ನು ಮಾದರಿ ನಗರವನ್ನಾಗಿ ಅಭಿವೃದ್ಧಿಪಡಿಸುವುದು.<br>**a. ನಮ್ಮ ಕಸ ನಮ್ಮ ಜವಾಬ್ದಾರಿ**<br>i. ಸಮುದಾಯದ ಸಹಭಾಗಿತ್ವದೊಂದಿಗೆ ತ್ಯಾಜ್ಯ ನಿರ್ವಹಣೆ ಯೋಜನೆಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಪರಿಣಿತ ತರಬೇತಿದಾರರು ಮತ್ತು ಶುಚಿಮಿತ್ರರಿಂದ ತರಬೇತಿ.<br>ii. ಪ್ರತಿ ವಲಯದಲ್ಲಿ ಕಲಿಕಾ ಕೇಂದ್ರಗಳನ್ನು ಸ್ಥಾಪಿಸಿ ಶೂನ್ಯ ತ್ಯಾಜ್ಯ ಮನೆಗಳ ಪರಿಕಲ್ಪನೆಯ ಕುರಿತು ಮಾಹಿತಿ ಮತ್ತು ಶಿಕ್ಷಣ.<br>iii. ಮನೆಯಲ್ಲೇ ಹಸಿ ಕಸ ಸಂಸ್ಕರಿಸಿ ಗೊಬ್ಬರ ತಯಾರಿಕೆಗೆ ಪ್ರೋತ್ಸಾಹ ಸ್ಥಳೀಯವಾಗಿ ಗೊಬ್ಬರ ಖರೀದಿ ಕೇಂದ್ರ ಸ್ಥಾಪನೆ.<br>**b. ಸಮಗ್ರ ತ್ಯಾಜ್ಯ ನಿರ್ವಹಣಾ ವ್ಯವಸ್ಥೆ**<br>ನಗರ ತ್ಯಾಜ್ಯದ ದಕ್ಷ ನಿರ್ವಹಣೆಗೆ ಸಾಂಸ್ಥಿಕ ರೂಪ. |

| | | |
|---|---|---|
| | | i. ಅಸ್ತಿತ್ವದಲ್ಲಿರುವ ಸಂಸ್ಕರಣಾ ಘಟಕಗಳ ನವೀಕರಣ ಹಾಗೂ ಸಾಮರ್ಥ್ಯ ವೃದ್ಧಿ.<br>ii. ತಂತ್ರಜ್ಞಾನ ಅಳವಡಿಕೆಯ ಮೂಲಕ ಸುವ್ಯವಸ್ಥಿತ ತ್ಯಾಜ್ಯ ಸಂಗ್ರಹಣೆ ಹಾಗೂ ನಿಗಾ ವಹಿಸಲು ಕ್ರಮ.<br>iii. ಹಳೆ ತ್ಯಾಜ್ಯ ವಿಲೇವಾರಿ ಪ್ರದೇಶಗಳ (Legacy Dump site) ಪುನಃಶ್ಚೇತನ ಮತ್ತು ಅಭಿವೃದ್ಧಿ.<br>iv. ಮಾದರಿ ತ್ಯಾಜ್ಯ ಸಂಗ್ರಹ ಘಟಕಗಳ ಯೋಜನೆ, ವಿನ್ಯಾಸ ಹಾಗೂ ಅನುಷ್ಠಾನ.<br><br>**III. <u>ಹಸಿರು ಬೆಂಗಳೂರು:</u>**<br>'ಉದ್ಯಾನ ನಗರಿ' ಅಂಕಿತವನ್ನು ಸಾರ್ಥಕಗೊಳಿಸುವುದು.<br>**a. ಹಸಿರು ನೆರೆಹೊರೆ:**<br>i. ರಾಜ್ಯ ಸರ್ಕಾರದ ಸಾರ್ವಜನಿಕ ಉದ್ದಿಮೆಗಳ ಭೂಮಿಯಲ್ಲಿ ಎರಡು ಹೊಸ ಉದ್ಯಾನಗಳ ಸ್ಥಾಪನೆ (ಎನ್.ಜಿ.ಇ.ಎಫ್., ಮೈಸೂರು ಲ್ಯಾಂಪ್ಸ್).<br>ii. ನಗರದ ಹೊರವಲಯದ ಮಾಚೋಹಳ್ಳಿ ಮತ್ತು ಭೂತನಹಳ್ಳಿಗಳಲ್ಲಿ 600 ಎಕರೆಗಳಲ್ಲಿ 2 ಬೃಹತ್ ವೃಕ್ಷೋದ್ಯಾನಗಳನ್ನು ನಿರ್ಮಿಸುವುದು.<br>iii. ನಗರದ ಕಿರು ಅರಣ್ಯಗಳನ್ನು ಜನಪ್ರಿಯಗೊಳಿಸುವುದು, (ತುರಹಳ್ಳಿ, ಜೆ.ಪಿ.ನಗರ, ಕಾಡುಗೋಡಿ, ಮತ್ತಿಕೆರೆ).<br>iv. ಗಾಳಿಯ ಗುಣಮಟ್ಟದ ಪರೀಕ್ಷಾ ಮಾಪಕಗಳನ್ನು ಹೆಚ್ಚಿಸುವ ಮೂಲಕ ಸುತ್ತುವರಿದ ಗಾಳಿಯ ಗುಣಮಟ್ಟದ ಕುರಿತು ತೀವ್ರ ನಿಗಾ ವಹಿಸುವುದು.<br>**b. ಜಲಮೂಲಗಳ ಸಂರಕ್ಷಣೆ:**<br>i. ಜಲಮಾರ್ಗ ಸೌಂದರ್ಯ ವರ್ಧನೆ: ಕೆ-100 ರಾಜಕಾಲುವೆ ಅಭಿವೃದ್ಧಿ ಯೋಜನೆ.<br>ii. 5 ಕೆರೆಗಳ ಪುನಃಶ್ಚೇತನ.<br>iii. ನೀರಿನ ಗುಣಮಟ್ಟವನ್ನು ಹೆಚ್ಚಿಸುವುದು ಮತ್ತು ಸರೋವರಗಳ ಸುತ್ತ ಜೀವವೈವಿಧ್ಯ ಸಂರಕ್ಷಣೆ.<br>iv. ಭಾಗೀದಾರರು ಮತ್ತು ಸ್ವಯಂಸೇವಕರ ಸಹಯೋಗ. |

| | | |
|---|---|---|
| | | v. 20 ಸರೋವರಗಳಲ್ಲಿ ನೀರಿನ ಗುಣಮಟ್ಟದ ಮೇಲೆ ಸದಾಕಾಲ ನಿಗಾವಹಿಸುವುದು.<br><br>**IV. <u>ಜನ ಸಂಪರ್ಕ:</u>**<br>ಡಿಜಿಟಲ್ ವೇದಿಕೆಯ ಮೂಲಕ ಸರ್ಕಾರ ಮತ್ತು ನಾಗರೀಕರ ಸಂಪರ್ಕ, ಸಂವಹನ.<br>**a. ಜನಸಂಪರ್ಕಕ್ಕಾಗಿ ಏಕೀಕೃತ ಡಿಜಿಟಲ್ ಪೋರ್ಟಲ್**<br>i. ಆನ್‌ಲೈನ್ ಮೂಲಕ ನಾಗರೀಕರಿಗೆ ಖಾತಾ, ಆಸ್ತಿ ತೆರಿಗೆ, ಜನನ ಮತ್ತು ಮರಣ ಪ್ರಮಾಣಪತ್ರ ವ್ಯಾಪಾರ ಪರವಾನಗಿಗಳಂತಹ ಸೇವೆಗಳನ್ನು ಒದಗಿಸುವುದು.<br>ii. ಆನ್‌ಲೈನ್ ಮೂಲಕ ನಾಗರೀಕರಿಗೆ, ರಸ್ತೆಯ ಇತಿಹಾಸ ಬಗ್ಗೆ ಮಾಹಿತಿ ನೀಡುವುದು.<br>iii. ನಾಗರೀಕರಿಗೆ Location aware ತಂತ್ರಜ್ಞಾನದ ಮೂಲಕ ನಾಗರೀಕ ಸೇವೆಗಳು, ಕಾರ್ಯಕ್ರಮಗಳು ಮತ್ತು ಅಧಿಕಾರಿಗಳ ಬಗ್ಗೆ ಅರಿವು ಮೂಡಿಸುವುದು.<br>iv. ಬೆಂಗಳೂರು ನಾಗರೀಕರಿಗೆ, ಉತ್ತಮ ಬಳಕೆದಾರರ ಅನುಭವವನ್ನು ಖಾತ್ರಿಪಡಿಸಿಕೊಳ್ಳಲು ಮತ್ತು ಕುಂದುಕೊರತೆ ಪರಿಹಾರಕ್ಕಾಗಿ ಇರುವ ಸಹಾಯ ಪೋರ್ಟಲ್‌ನ ಮರು ವಿನ್ಯಾಸ ಮಾಡುವುದು.<br>**b. ಬೆಂಗಳೂರಿಗೊಂದು ಬೆಳಕಿಂಡಿ**<br>i. NGEF ನಲ್ಲಿ ಬೆಂಗಳೂರಿನ ಸಂಸ್ಕೃತಿ, ಪರಂಪರೆ ಮತ್ತು ಕರಕುಶಲ ವಸ್ತು ಸಂಗ್ರಹಾಲಯ.<br>ii. NGEF ನಲ್ಲಿ ಸಾರ್ವಜನಿಕರಿಗಾಗಿ ಅತ್ಯಾಧುನಿಕ ಮನರಂಜನೆ ಸೌಲಭ್ಯಗಳು ಮತ್ತು ಸಾಂಸ್ಕೃತಿಕ ಕೇಂದ್ರ ಸ್ಥಾಪನೆ, ಕಲಾವಿದರು, ಕುಶಲಕರ್ಮಿಗಳು ಮತ್ತು ಇತರ ಸೃಜನಶೀಲ ವೃತ್ತಿಪರರಿಗೆ ಅವಕಾಶ.<br>iii. ಮೈಸೂರು ಲ್ಯಾಂಪ್ಸ್ ಫ್ಯಾಕ್ಟರಿಯಲ್ಲಿ ಲಿವಿಂಗ್ ಸಿಟಿ ಲ್ಯಾಬೋರೇಟರಿ ಪ್ರಾತ್ಯಕ್ಷಿಕೆ ಮತ್ತು ಸಂವಾದದ ಮೂಲಕ ಕಲಿಕೆಯ ವಲಯಗಳ ಸ್ಥಾಪನೆ.<br>iv. ಮೈಸೂರು ಲ್ಯಾಂಪ್ಸ್ ಫ್ಯಾಕ್ಟರಿಯಲ್ಲಿ ಬೆಂಗಳೂರಿನ ತಂತ್ರಜ್ಞಾನವನ್ನು ತಿಳಿಸುವ "ಇತಿಹಾಸ" ಡಿಜಿಟಲ್ ಪ್ರಾತ್ಯಕ್ಷಿಕೆ ಕೇಂದ್ರ ಸ್ಥಾಪನೆ. |

| | | |
|---|---|---|
| | | v. ಮೈಸೂರು ಲ್ಯಾಂಪ್ಸ್ ಫ್ಯಾಕ್ಟರಿಯಲ್ಲಿ ಬೆಂಗಳೂರು ಇನ್ನೋವೇಷನ್ ಸೆಂಟರ್ ಸ್ಥಾಪನೆ-ಉದ್ಯಮಶೀಲತೆ, ನಾವೀನ್ಯತೆ ಮತ್ತು ಜೈವಿಕ ತಂತ್ರಜ್ಞಾನ ಉದ್ಯಮದ ಮುನ್ನಡೆಗೆ ಪೂರಕ.<br><br>ಹಸಿರು ಬೆಂಗಳೂರು-ಜಲಮೂಲಗಳ ಸಂರಕ್ಷಣೆಗಳ ಅಡಿಯಲ್ಲಿ 2020-21, 2021-2022 ನೇ ಸಾಲಿನ 2 ವರ್ಷದ ಅವಧಿಯೊಳಗೆ 5 ಕೆರೆಗಳನ್ನು ಪುನಶ್ಚೇತನಗೊಳಿಸಿ, 20 ಸರೋವರಗಳಲ್ಲಿ ನೀರಿನ ಗುಣಮಟ್ಟದ ಮೇಲೆ ಸದಾಕಾಲ ನಿಗಾ ವಹಿಸುವ ಮೂಲಕ ಅಭಿವೃದ್ಧಿಗೊಳಿಸಲು ಯೋಜಿಸಲಾಗಿದೆ. ವಿವರವನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |
| ಇ | ಬೆಂಗಳೂರು ಮಿಷನ್-2022ರಲ್ಲಿ ಇಲ್ಲಿಯವರೆಗೆ ಕೈಗೊಂಡ ಕಾಮಗಾರಿಗಳ ಪ್ರಗತಿ ವಿವರಗಳನ್ನು ಒದಗಿಸುವುದು: | **"ಸುಗಮ ಸಂಚಾರ" ರ ಅಡಿಯ-ಅತ್ಯುತ್ತಮ ಮುಖ್ಯರಸ್ತೆಗಳು ಅಂಶಗಳಡಿಯಲ್ಲಿ ಒಳಗೊಂಡಿರುವ**<br>i. ಒಟ್ಟು 400 ಕಿ.ಮೀ ಉದ್ದದ ಪ್ರಮುಖ ಆರ್ಟೀರಿಯಲ್ ರಸ್ತೆಗಳ ವಾರ್ಷಿಕ ನಿರ್ವಹಣಾ ಒಪ್ಪಂದ.<br>ii. ಕರ್ಬ್ ಸ್ಟೋನ್ ಪೈಂಟಿಂಗ್ ಮತ್ತು ಲೇನ್ ಮಾರ್ಕಿಂಗ್ ಮೂಲಕ ರಸ್ತೆಯ ಸೌಂದರ್ಯ ವೃದ್ಧಿ.<br><br>ದೈನಂದಿನ ನಿರ್ವಹಣಾ ಕಾರ್ಯಕ್ರಮಗಳನ್ನು ಮಾತ್ರ ರಸ್ತೆ ಮೂಲಭೂತ ಸೌಕರ್ಯ ಶಾಖೆಯಿಂದ ಮಾರ್ಚ್-2021ರ ಅಂತ್ಯದ ಮಾಹೆಯಿಂದ ನಿರ್ವಹಣೆ ಕೈಗೊಳ್ಳುತ್ತಿದ್ದು, ಪ್ರಗತಿಯಲ್ಲಿರುತ್ತದೆ.<br><br>ಕ್ರಮ ಸಂಖ್ಯೆ: 3 ರ "ಹಸಿರು ಬೆಂಗಳೂರು"ರ ಜಲಮೂಲಗಳ ಸಂರಕ್ಷಣೆ ಅಡಿಯ- ಜಲಮಾರ್ಗ ಸೌಂದರ್ಯ ವರ್ಧನೆ: ಕೆ-100 ರಾಜಕಾಲುವೆ ಅಭಿವೃದ್ಧಿ ಯೋಜನೆ ಅಂಶವನ್ನು ಮಾತ್ರ ಬೃಹತ್ ನೀರುಗಾಲುವೆ ಶಾಖೆಯಿಂದ ನಿರ್ವಹಿಸುತ್ತಿದ್ದು, ಪ್ರಸ್ತುತದವರೆಗೆ ಶೇ.30% ಭೌತಿಕ ಪ್ರಗತಿ ಮತ್ತು ಶೇ.15% ರಷ್ಟು ಆರ್ಥಿಕ ಪ್ರಗತಿ ಸಾಧಿಸಲಾಗಿದೆ.<br><br>ತೋಟಗಾರಿಕೆ ವಿಭಾಗದಿಂದ ಬೆಂಗಳೂರು ಮಿಷನ್ 2022 ಯೋಜನೆಯಡಿಯಲ್ಲಿ ಯಾವುದೇ ಕಾಮಗಾರಿ ಕೈಗೊಂಡಿರುವುದಿಲ್ಲ. |

| | | |
|---|---|---|
| ಈ | ಸದರಿ ಯೋಜನೆಯ ಅನುಷ್ಠಾನವು ಮಂದಗತಿಯಲ್ಲಿ ಸಾಗುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಕಾರಣಗಳೇನು? (ವಿವರ ನೀಡುವುದು) | ಬಿಬಿಎಂಪಿಯ ರಸ್ತೆ ಮೂಲಭೂತ ಸೌಕರ್ಯ ವಿಭಾಗದಿಂದ ಅನುಷ್ಠಾನಗೊಳಿಸುತ್ತಿರುವ ಅಂಶಗಳನ್ನು ನಿಗಧಿತ ಕಾಲಾವಧಿಯಲ್ಲಿಯೇ ಕೈಗೊಳ್ಳಲಾಗುತ್ತಿದೆ.<br><br>ಬೆಂಗಳೂರು ಮಿಷನ್-2022 ರ ಯೋಜನೆಯ ಆಯ್ದ 25 ಕೆರೆಗಳ ಅಭಿವೃದ್ಧಿ ಮತ್ತು ಪುನಶ್ಚೇತನ ಕಾಮಗಾರಿಗಳನ್ನು ಯೋಜಿಸಿದಂತೆ ಡಿಸೆಂಬರ್-2022 ರೊಳಗೆ ಪೂರ್ಣಗೊಳಿಸಲು ಕ್ರಮಕೈಗೊಳ್ಳಲಾಗಿರುತ್ತದೆ.<br><br>ಬಿಬಿಎಂಪಿಯ ಬೃಹತ್ ನೀರುಗಾಲುವೆ ವಿಭಾಗದಿಂದ ಅನುಷ್ಠಾನಗೊಳಿಸುತ್ತಿರುವ ಜಲಮಾರ್ಗ ಸೌಂದರ್ಯ ವರ್ಧನೆ: ಕೆ-100 ರಾಜಕಾಲುವೆ ಅಭಿವೃದ್ಧಿ ಯೋಜನೆಯನ್ನು ನಿಗಧಿತ ಕಾಲಾವಧಿಯಲ್ಲಿಯೇ ಕೈಗೊಳ್ಳಲಾಗುತ್ತಿದೆ. |

**ಸಂಖ್ಯೆ: ನಅಇ 275 ಎಂಎನ್‌ವೈ 2021 (ಇ)**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ



ಅನುಬಂಧ-1

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಬೆಂಗಳೂರು ಮಿಷನ್ 2022 ಅನ್ನು ಜಾರಿಗೊಳಿಸಲು ಮಾನಿಟರಿಂಗ್ ಸಮಿತಿ (Monitoring Committee) ಯನ್ನು ರಚಿಸುವ ಬಗ್ಗೆ

* * * * *

ಪ್ರಸ್ತಾವನೆ:

1. ಬೆಂಗಳೂರು ನಗರ ಇಂದು ಜಗತ್ತಿನಲ್ಲಿಯೇ ಅತಿ ವೇಗವಾಗಿ ಬೆಳೆಯುತ್ತಿರುವ ನಗರಗಳಲ್ಲಿ ಒಂದು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ತಂತ್ರಜ್ಞಾನ ಹಾಗೂ ಜ್ಞಾನಾಧಾರಿತ ಉದ್ಯಮಗಳ ನೆಲೆಯಾಗಿರುವ ಬೆಂಗಳೂರಿನ ಕಿರೀಟದಲ್ಲಿರುವ ಗರಿಗಳು ಹಲವಾರು. ಈ ಗರಿಮೆಗೆ ಹಾಗೂ ನಗರ ಬೆಳೆಯುತ್ತಿರುವ ವೇಗಕ್ಕೆ ತಕ್ಕಂತೆ ಜಾಗತಿಕ ಮಟ್ಟದ ಸೌಲಭ್ಯಗಳನ್ನು ಒದಗಿಸುವುದು ಸರ್ಕಾರದ ಆದ್ಯತೆಯಾಗಿರುತ್ತದೆ.

2. ಈ ನಿಟ್ಟಿನಲ್ಲಿ ಭಾರತದ ಸ್ವಾತಂತ್ರ್ಯದ 75ನೇ ವರ್ಷಾಚರಣೆಯ ಸುಸಂದರ್ಭದಲ್ಲಿ ಮುಂದಿನ ಎರಡು ವರ್ಷಗಳಲ್ಲಿ ಅನುಷ್ಠಾನಗೊಳಿಸುವ ಗುರಿಯೊಂದಿಗೆ **"ಬೆಂಗಳೂರು ಮಿಷನ್ 2022-ಬೆಂಗಳೂರಿಗೆ ನವಚೈತನ್ಯ"** ಕಾರ್ಯಕ್ರಮವನ್ನು ಬೆಂಗಳೂರಿನ ಸಮಗ್ರ ಅಭಿವೃದ್ಧಿಗಾಗಿ ರೂಪಿಸಲಾಗಿದೆ. ನಗರದ ಸಮಸ್ಯೆಗಳನ್ನು ಕೂಲಂಕಷವಾಗಿ ಅಧ್ಯಯನ ನಡೆಸಿ, ಸ್ಪಷ್ಟ ಮುನ್ನೋಟದೊಂದಿಗೆ ಸಿದ್ಧಪಡಿಸಿರುವ ಈ ಯೋಜನೆಯು ಬೆಂಗಳೂರನ್ನು ಎಲ್ಲ ಆಯಾಮಗಳಲ್ಲಿಯೂ ವಿಶ್ವದರ್ಜೆಯ ನಗರವಾಗಿ ರೂಪಿಸುವ ಮಹತ್ವಾಕಾಂಕ್ಷೆಯನ್ನು ಹೊಂದಿದೆ. ಸದರಿ ಕಾರ್ಯಕ್ರಮದಲ್ಲಿ ಈ ಕೆಳಗಿನ ನಾಲ್ಕು ಮುಖ್ಯಾಂಶಗಳು ಒಳಗೊಂಡಿವೆ.

**I. <u>ಸುಗಮ ಸಂಚಾರ :</u>**

ಬೆಂಗಳೂರಿಗೆ ಅತ್ಯಾಧುನಿಕ ಸಾರಿಗೆ ವ್ಯವಸ್ಥೆ ಕಲ್ಪಿಸುವುದು.

a) ಅತ್ಯುತ್ತಮ ಮುಖ್ಯರಸ್ತೆಗಳು

(i) ಒಟ್ಟು 190 ಕಿ.ಮೀ ಉದ್ದದ 12 ಹೆಚ್ಚಿನ ವಾಹನ ದಟ್ಟಣೆ ಹೊಂದಿರುವ (High Density Corridor) ರಸ್ತೆಗಳನ್ನು ಕೆಆರ್‌ಡಿಸಿಎಲ್ ಮೂಲಕ ಅಭಿವೃದ್ಧಿ

(ii) ಸ್ಮಾರ್ಟ್ ಸಿಟಿ ರಸ್ತೆ ಕಾಮಗಾರಿಗಳನ್ನು ತ್ವರಿತವಾಗಿ ಪೂರ್ಣಗೊಳಿಸುವುದು.

(iii) ಒಟ್ಟು 400 ಕಿ.ಮೀ ಉದ್ದದ ಪ್ರಮುಖ ಆರ್ಟೀರಿಯಲ್ ರಸ್ತೆಗಳ ವಾರ್ಷಿಕ ನಿರ್ವಹಣಾ ಒಪ್ಪಂದ.

(iv) ಕರ್ಬ್ ಸ್ಟೋನ್ ಪೇಂಟಿಂಗ್ ಮತ್ತು ಲೇನ್ ಮಾರ್ಕಿಂಗ್ ಮೂಲಕ ರಸ್ತೆಯ ಸೌಂದರ್ಯ ವೃದ್ಧಿ.

(v) ಸಮನ್ವಯ ಹೊಂದಿದ ಟ್ರಾಫಿಕ್ ಸಿಗ್ನಲ್ ದೀಪಗಳ ಸ್ಥಾಪನೆ ಮಾಡುವುದು.

b) ಸ್ಮಾರ್ಟ್ ಸಂಚಾರ

(i) ವಿದ್ಯುತ್ ಚಾಲಿತ ಸಮೂಹ ಸಾರಿಗೆ ವ್ಯವಸ್ಥೆ ಬಳಕೆಗೆ ಉತ್ತೇಜನ.

(ii) ವೇಗವಾಗಿ ಮೆಟ್ರೋ ಕಾಮಗಾರಿಯನ್ನು ಪೂರ್ಣಗೊಳಿಸುವುದು.

(iii) ಬಸ್ ಆದ್ಯತಾ ಪಥ ವ್ಯವಸ್ಥೆಯ ವಿಸ್ತರಣೆ.

(iv) ಮಾಲಿನ್ಯ ಮತ್ತು ಟ್ರಾಫಿಕ್ ಕಡಿಮೆ ಮಾಡಲು ಉಪನಗರ ರೈಲುಗಳ ಕಾರ್ಯಾಚರಣೆ.

**II. <u>ಸ್ವಚ್ಛ ಬೆಂಗಳೂರು :</u>**

ತ್ಯಾಜ್ಯ ನಿರ್ವಹಣೆಯಲ್ಲಿ ಬೆಂಗಳೂರನ್ನು ಮಾದರಿ ನಗರವನ್ನಾಗಿ ಅಭಿವೃದ್ಧಿಪಡಿಸುವುದು.

a) ನಮ್ಮ ಕಸ ನಮ್ಮ ಜವಾಬ್ದಾರಿ

(i) ಸಮುದಾಯದ ಸಹಭಾಗಿತ್ವದೊಂದಿಗೆ ತ್ಯಾಜ್ಯ ನಿರ್ವಹಣೆ ಯೋಜನೆಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಪರಿಣತ ತರಬೇತಿದಾರರು ಮತ್ತು ಶುಚಿಮಿತ್ರರಿಂದ ತರಬೇತಿ.

(ii) ಪ್ರತಿ ವಲಯದಲ್ಲಿ ಕಲಿಕಾ ಕೇಂದ್ರಗಳನ್ನು ಸ್ಥಾಪಿಸಿ ಶೂನ್ಯ ತ್ಯಾಜ್ಯ ಮನೆಗಳ ಪರಿಕಲ್ಪನೆಯ ಕುರಿತು ಮಾಹಿತಿ ಮತ್ತು ಶಿಕ್ಷಣ.

(iii) ಮನೆಯಲ್ಲೇ ಹಸಿ ಕಸ ಸಂಸ್ಕರಿಸಿ ಗೊಬ್ಬರ ತಯಾರಿಕೆಗೆ ಪ್ರೋತ್ಸಾಹ-ಸ್ಥಳೀಯವಾಗಿ ಗೊಬ್ಬರ ಖರೀದಿ ಕೇಂದ್ರ ಸ್ಥಾಪನೆ.

b) ಸಮಗ್ರ ತ್ಯಾಜ್ಯ ನಿರ್ವಹಣಾ ವ್ಯವಸ್ಥೆ:

ನಗರ ತ್ಯಾಜ್ಯದ ದಕ್ಷ ನಿರ್ವಹಣೆಗೆ ಸಾಂಸ್ಥಿಕ ರೂಪ.

(i) ಅಸ್ತಿತ್ವದಲ್ಲಿರುವ ಸಂಸ್ಕರಣಾ ಘಟಕಗಳ ನವೀಕರಣ ಹಾಗೂ ಸಾಮರ್ಥ್ಯ ವೃದ್ಧಿ.

(ii) ತಂತ್ರಜ್ಞಾನ ಅಳವಡಿಕೆಯ ಮೂಲಕ ಸುವ್ಯವಸ್ಥಿತ ತ್ಯಾಜ್ಯ ಸಂಗ್ರಹಣೆ ಹಾಗೂ ನಿಗಾ ವಹಿಸಲು ಕ್ರಮ.

(iii) ಹಳೆ ತ್ಯಾಜ್ಯ ವಿಲೇವಾರಿ ಪ್ರದೇಶಗಳ (Legacy dump sites) ಪುನಶ್ಚೇತನ ಮತ್ತು ಅಭಿವೃದ್ಧಿ.

(iv) ಮಾದರಿ ತ್ಯಾಜ್ಯ ಸಂಗ್ರಹ ಘಟಕಗಳ ಯೋಜನೆ, ವಿನ್ಯಾಸ ಹಾಗೂ ಅನುಷ್ಠಾನ.

## III. <u>ಹಸಿರು ಬೆಂಗಳೂರು :</u>

'ಉದ್ಯಾನ ನಗರಿ' ಅಂಕಿತವನ್ನು ಸಾರ್ಥಕಗೊಳಿಸುವುದು.

a) ಹಸಿರು ನೆರೆಹೊರೆ

(i) ರಾಜ್ಯ ಸರ್ಕಾರದ ಸಾರ್ವಜನಿಕ ಉದ್ದಿಮೆಗಳ ಭೂಮಿಯಲ್ಲಿ ಎರಡು ಹೊಸ ಉದ್ಯಾನಗಳ ಸ್ಥಾಪನೆ. (ಎನ್.ಜಿ.ಇ.ಎಫ್., ಮೈಸೂರು ಲ್ಯಾಂಪ್ಸ್)

(ii) ನಗರದ ಹೊರವಲಯದ ಮಾಚೋಹಳ್ಳಿ ಮತ್ತು ಭೂತನಹಳ್ಳಿಗಳಲ್ಲಿ 600 ಎಕರೆಗಳಲ್ಲಿ 2 ಬೃಹತ್ ವೃಕ್ಷೋದ್ಯಾನಗಳನ್ನು ನಿರ್ಮಿಸುವುದು.

(iii) ನಗರದ ಕಿರು ಅರಣ್ಯಗಳನ್ನು ಜನಪ್ರಿಯಗೊಳಿಸುವುದು. (ತುರಹಳ್ಳಿ, ಜೆ.ಪಿ.ನಗರ, ಕಾಡುಗೋಡಿ, ಮತ್ತಿಕೆರೆ)

(iv) ಗಾಳಿಯ ಗುಣಮಟ್ಟದ ಪರೀಕ್ಷಾ ಮಾಪಕಗಳನ್ನು ಹೆಚ್ಚಿಸುವ ಮೂಲಕ ಸುತ್ತುವರಿದ ಗಾಳಿಯ ಗುಣಮಟ್ಟದ ಕುರಿತು ತೀವ್ರ ನಿಗಾ ವಹಿಸುವುದು.

b) ಜಲಮೂಲಗಳ ಸಂರಕ್ಷಣೆ

(i) ಜಲಮಾರ್ಗ ಸೌಂದರ್ಯ ವರ್ಧನೆ: K-100 ರಾಜ ಕಾಲುವೆ ಅಭಿವೃದ್ಧಿ ಯೋಜನೆ.

(ii) 5 ಕೆರೆಗಳ ಪುನಶ್ಚೇತನ.

(iii) ನೀರಿನ ಗುಣಮಟ್ಟವನ್ನು ಹೆಚ್ಚಿಸುವುದು ಮತ್ತು ಸರೋವರಗಳ ಸುತ್ತ ಜೀವವೈವಿಧ್ಯ ಸಂರಕ್ಷಣೆ.

(iv) ಭಾಗೀದಾರರು ಮಮತ್ತು ಸ್ವಯಂಸೇವಕರ ಸಹಯೋಗ.

(v) 20 ಸರೋವರಗಳಲ್ಲಿ ನೀರಿನ ಗುಣಮಟ್ಟದ ಮೇಲೆ ಸದಾಕಾಲ ನಿಗಾ ವಹಿಸುವುದು.

## IV. <u>ಜನ ಸಂಪರ್ಕ :</u>

ಡಿಜಿಟಲ್ ವೇದಿಕೆಯ ಮೂಲಕ ಸರ್ಕಾರ ಮತ್ತು ನಾಗರಿಕರ ಸಂಪರ್ಕ, ಸಂವಹನ.

a) ಜನಸಂಪರ್ಕಕ್ಕಾಗಿ ಏಕೀಕೃತ ಡಿಜಿಟಲ್ ಪೋರ್ಟಲ್

(i) ಆನ್‌ಲೈನ್ ಮೂಲಕ ನಾಗರಿಕರಿಗೆ ಖಾತಾ, ಆಸ್ತಿ ತೆರಿಗೆ, ಜನನ ಮತ್ತು ಮರಣ ಪ್ರಮಾಣಪತ್ರ, ವ್ಯಾಪಾರ ಪರವಾನಗಿಗಳಂತಹ ಸೇವೆಗಳನ್ನು ಒದಗಿಸುವುದು.

(ii) ಆನ್‌ಲೈನ್ ಮೂಲಕ ನಾಗರಿಕರಿಗೆ ರಸ್ತೆಯ-ಇತಿಹಾಸ ಬಗ್ಗೆ ಮಾಹಿತಿ ನೀಡುವುದು.

(iii) ನಾಗರಿಕರಿಗೆ Location aware ತಂತ್ರಜ್ಞಾನದ ಮೂಲಕ ನಾಗರಿಕ ಸೇವೆಗಳು, ಕಾರ್ಯಕ್ರಮಗಳು ಮತ್ತು ಅಧಿಕಾರಿಗಳ ಬಗ್ಗೆ ಅರಿವು ಮೂಡಿಸುವುದು.

(iv) ಬೆಂಗಳೂರು ನಾಗರಿಕರಿಗೆ ಉತ್ತಮ ಬಳಕೆದಾರ ಅನುಭವವನ್ನು ಖಾತ್ರಿಪಡಿಸಿಕೊಳ್ಳಲು ಮತ್ತು ಕುಂದುಕೊರತೆ ಪರಿಹಾರಕ್ಕಾಗಿ ಇರುವ ಸಹಾಯ ಪೋರ್ಟಲ್‌ನ ಮರುವಿನ್ಯಾಸ ಮಾಡುವುದು.

**b) ಬೆಂಗಳೂರಿಗೊಂದು ಬೆಳಕಿಂಡಿ**

(i) NGEFನಲ್ಲಿ ಬೆಂಗಳೂರಿನ ಸಂಸ್ಕೃತಿ, ಪರಂಪರೆ ಮತ್ತು ಕರಕುಶಲ ವಸ್ತು ಸಂಗ್ರಹಾಲಯ.

(ii) NGEFನಲ್ಲಿ ಸಾರ್ವಜನಿಕರಿಗಾಗಿ ಅತ್ಯಾಧುನಿಕ ಮನರಂಜನೆ ಸೌಲಭ್ಯಗಳು ಮತ್ತು ಮತ್ತು ಸಾಂಸ್ಕೃತಿಕ ಕೇಂದ್ರ ಸ್ಥಾಪನೆ. ಕಲಾವಿದರು, ಕುಶಲಕರ್ಮಿಗಳು ಮತ್ತು ಇತರ ಸೃಜನಶೀಲ ವೃತ್ತಿಪರರಿಗೆ ಅವಕಾಶ.

(iii) ಮೈಸೂರು ಲ್ಯಾಂಪ್ ಫ್ಯಾಕ್ಟರಿಯಲ್ಲಿ ಲಿವಿಂಗ್ ಸಿಟಿ ಲ್ಯಾಬೊರೇಟರಿ ಪ್ರಾತ್ಯಕ್ಷಿಕೆ ಮತ್ತು ಸಂವಾದದ ಮೂಲಕ ಕಲಿಕೆಯ ವಲಯಗಳ ಸ್ಥಾಪನೆ.

(iv) ಮೈಸೂರು ಲ್ಯಾಂಪ್ ಫ್ಯಾಕ್ಟರಿಯಲ್ಲಿ ಬೆಂಗಳೂರಿನ ತಂತ್ರಜ್ಞಾನ ಇತಿಹಾಸವನ್ನು ತಿಳಿಸುವ 'ಇತಿಹಾಸ' ಡಿಜಿಟಲ್ ಪ್ರಾತ್ಯಕ್ಷಿಕೆ ಕೇಂದ್ರ ಸ್ಥಾಪನೆ.

(v) ಮೈಸೂರು ಲ್ಯಾಂಪ್ ಫ್ಯಾಕ್ಟರಿಯಲ್ಲಿ ಬೆಂಗಳೂರು ಇನ್ನೋವೇಶನ್ ಸೆಂಟರ್ ಸ್ಥಾಪನೆ–ಉದ್ಯಮಶೀಲತೆ, ನಾವೀನ್ಯತೆ ಮತ್ತು ಜೈವಿಕ ತಂತ್ರಜ್ಞಾನ ಉದ್ಯಮದ ಮುನ್ನಡೆಗೆ ಪೂರಕ.

3. ಈ ಎಲ್ಲ ಅಂಶಗಳ ಸುಗಮ ಮತ್ತು ಸಕಾಲಿಕ ಅನುಷ್ಠಾನಕ್ಕಾಗಿ ಉನ್ನತ ಮಟ್ಟದ ಮೇಲ್ವಿಚಾರಣೆ ನಿರ್ಣಾಯಕ ಅತ್ಯಗತ್ಯವಾಗಿರುವುದನ್ನು ಮನಗಂಡು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯ ಅಪೆಕ್ಸ್ ಮೇಲುಸ್ತುವಾರಿ ಸಮಿತಿ (Apex Monitoring Committee under the Chairmanship of Hon'ble Chief Minister) ಮತ್ತು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯ ಮೇಲುಸ್ತುವಾರಿ ಸಮಿತಿ (Monitoring Committee under the Chairmanship of Chief Secretary to the Government) ಗಳನ್ನು ಸೃಜಿಸಲು ಪ್ರಸ್ತಾಪಿಸಲಾಗಿದೆ.

4. ಸದರಿ ಸಮಿತಿಗಳ ಸ್ಥೂಲ ಕಾರ್ಯಚಟುವಟಿಕೆ ಈಕೆಳಗಿನಂತೆ ಇರುತ್ತದೆ.

I. **ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯ ಅಪೆಕ್ಸ್ ಮೇಲುಸ್ತುವಾರಿ ಸಮಿತಿ (Apex Monitoring Committee under the Chairmanship of Hon'ble Chief Minister)**

(i) ಪ್ರತಿ 15 ದಿನಗಳಿಗೆ ಒಮ್ಮೆ ಕಾರ್ಯಕ್ರಮದ ಪ್ರಗತಿ ಪರಾಮರ್ಶೆ ನಡೆಸುವುದು.

(ii) ಮುಖ್ಯ ಪ್ರಸ್ತಾವನೆಗಳ ಕುರಿತು ಏಕ-ಗವಾಕ್ಷಿ ಮಾದರಿಯಲ್ಲಿ ನಿರ್ಣಯ ತೆಗೆದುಕೊಳ್ಳುವುದು.

(iii) ಮಾನ್ಯ ಮುಖ್ಯಮಂತ್ರಿಗಳು ತುರ್ತು ಸಂದರ್ಭದಲ್ಲಿ ಅಪೆಕ್ಸ್ ಮೇಲುಸ್ತುವಾರಿ ಸಮಿತಿಯ ಅನುಮೋದನೆಯನ್ನು ನಿರೀಕ್ಷಿಸಿ ಅನುಮೋದಿಸಿರುವ ಪ್ರಸ್ತಾವನೆಗಳ ಸ್ಥಿರೀಕರಣ.

II. ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯ ಮೇಲುಸ್ತುವಾರಿ ಸಮಿತಿ (Monitoring Committee under the Chairmanship of Chief Secretary to the Government)

(i) ಪ್ರತಿ 7 ದಿನಗಳಿಗೆ ಒಮ್ಮೆ ಕಾರ್ಯಕ್ರಮದ ಪ್ರಗತಿ ಪರಾಮರ್ಶೆ ನಡೆಸುವುದು ಮತ್ತು ನಿರೀಕ್ಷಿತ ಪ್ರಗತಿಯನ್ನು ಕಾಯ್ದುಕೊಳ್ಳಲು ಅಗತ್ಯ ಕ್ರಮಗಳನ್ನು ರೂಪಿಸುವುದು.
(ii) ವಿವಿಧ ಇಲಾಖೆ/ಸಂಸ್ಥೆಗಳ ನಡುವೆ ಸಮನ್ವಯ ಸಾಧಿಸುವುದು.
(iii) ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯ ಅಪೆಕ್ಸ್ ಮೇಲುಸ್ತುವಾರಿ ಸಮಿತಿಗೆ ಕಾರ್ಯಕ್ರಮದ ಪ್ರಗತಿಯ ಬಗ್ಗೆ ನಿಯಮಿತವಾಗಿ ವರದಿ ಸಲ್ಲಿಸುವುದು.
(iv) ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯ ಅಪೆಕ್ಸ್ ಮೇಲುಸ್ತುವಾರಿ ಸಮಿತಿ ಸೂಚಿಸುವ ಇನ್ನಾವುದೇ ಕಾರ್ಯಚಟುವಟಿಕೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 259 ಎಂಎನ್ ವೈ 2020**
**ದಿನಾಂಕ: 21-12-2020**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, "ಬೆಂಗಳೂರು ಮಿಷನ್ 2022- ಬೆಂಗಳೂರಿಗೆ ನವಚೈತನ್ಯ" ಕಾರ್ಯಕ್ರಮದ ಮೇಲುಸ್ತುವಾರಿಗಾಗಿ ಈ ಕೆಳಕಂಡ ಸಮಿತಿಗಳನ್ನು ಸೃಜಿಸಿ ಆದೇಶಿಸಿದೆ.

I. ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯ ಅಪೆಕ್ಸ್ ಮೇಲುಸ್ತುವಾರಿ ಸಮಿತಿ (Apex Monitoring Committee under the Chairmanship of Hon'ble Chief Minister)

1) ಉಪಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ ಸಚಿವರು, ಐಟಿ-ಬಿಟಿ, ವಿಜ್ಞಾನ ಹಾಗೂ ತಂತ್ರಜ್ಞಾನ ಇಲಾಖೆ ಮತ್ತು ಕೌಶಲ್ಯಾಭಿವೃದ್ಧಿ ಇಲಾಖೆ.
2) ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು
3) ಕಂದಾಯ ಸಚಿವರು
4) ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು
5) ಸಹಕಾರ ಸಚಿವರು
6) ವಸತಿ ಸಚಿವರು
7) ನಗರಾಭಿವೃದ್ಧಿ ಸಚಿವರು
8) ಆಹಾರ ಮತ್ತು ನಾಗರಿಕ ಸರಬರಾಜು ಸಚಿವರು
9) ಅಧ್ಯಕ್ಷರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ
10) ಸರ್ಕಾರದ ಮುಖ್ಯಕಾರ್ಯದರ್ಶಿಗಳು
11) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು / ಅಭಿವೃದ್ಧಿ ಆಯುಕ್ತರು
12) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ಒಳಾಡಳಿತ ಇಲಾಖೆ
13) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ಅರಣ್ಯ ಇಲಾಖೆ
14) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ಆರ್ಥಿಕ ಇಲಾಖೆ
15) ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮೆಟ್ರೋ ರೈಲ್ ಕಾರ್ಪೋರೇಷನ್ ಲಿಮಿಟೆಡ್
16) ಮಾನ್ಯ ಮುಖ್ಯಮಂತ್ರಿಗಳ ಅಪರ ಮುಖ್ಯ ಕಾರ್ಯದರ್ಶಿಗಳು
17) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ನಗರಾಭಿವೃದ್ಧಿ ಇಲಾಖೆ
18) ಪ್ರಧಾನ ಕಾರ್ಯದರ್ಶಿಗಳು-ವಾಣಿಜ್ಯ ಮತ್ತು ಕೈಗಾರಿಕೆ

19) ಬೆಂಗಳೂರು ನಗರ ಪೋಲಿಸ್ ಆಯುಕ್ತರು
20) ಆಡಳಿತಗಾರರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ- ವಿಶೇಷ ಆಹ್ವಾನಿತರು
21) ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ – ಸದಸ್ಯ ಕಾರ್ಯದರ್ಶಿ

**II. ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯ ಮೇಲುಸ್ತುವಾರಿ ಸಮಿತಿ (Monitoring Committee under the Chairmanship of Chief Secretary to the Government)**

1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು/ಅಭಿವೃದ್ಧಿ ಆಯುಕ್ತರು
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ಇ-ಆಡಳಿತ
3) ಆಯುಕ್ತರು, ನಗರ ಭೂಸಾರಿಗೆ ನಿರ್ದೇಶನಾಲಯ
4) ಮಾನ್ಯ ಮುಖ್ಯಮಂತ್ರಿಗಳ ಅಪರ ಮುಖ್ಯ ಕಾರ್ಯದರ್ಶಿಗಳು
5) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ನಗರಾಭಿವೃದ್ಧಿ ಇಲಾಖೆ
6) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು-ವಾಣಿಜ್ಯ ಮತ್ತು ಕೈಗಾರಿಕೆ
7) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು-ಸಾರಿಗೆ ಇಲಾಖೆ
8) ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ
9) ಅಧ್ಯಕ್ಷರು, ಬೆಂಗಳೂರು ನೀರುಸರಬರಾಜು ಮತ್ತು ಒಳಚರಂಡಿ ಮಂಡಳಿ.
10) ಬೆಂಗಳೂರು ನಗರ ಪೋಲಿಸ್ ಆಯುಕ್ತರು
11) ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ
12) ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ
13) ವಿಶೇಷ ಆಯುಕ್ತರು (ಘನತ್ಯಾಜ್ಯ ನಿರ್ವಹಣೆ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ
14) ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್
15) ಸರ್ಕಾರದ ಕಾರ್ಯದರ್ಶಿಗಳು- ಸಣ್ಣ ನೀರಾವರಿ ಇಲಾಖೆ
16) ಸರ್ಕಾರದ ಕಾರ್ಯದರ್ಶಿಗಳು- ಲೋಕೋಪಯೋಗಿ ಇಲಾಖೆ
17) ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ
18) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ
19) ಆಡಳಿತಗಾರರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ- ವಿಶೇಷ ಆಹ್ವಾನಿತರು
20) ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ – ಸದಸ್ಯ ಕಾರ್ಯದರ್ಶಿ

ಸದರಿ ಸಮಿತಿಗಳು ಪ್ರಸ್ತಾವನೆಯ ಕಂಡಿಕೆ 4 ರಲ್ಲಿ ನಿಗದಿಪಡಿಸಿರುವ ಸ್ಥೂಲ ಕಾರ್ಯಚಟುವಟಿಕೆಗಳನ್ನು ಅನುಸರಿಸುವುದು. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರು ಸದಸ್ಯ ಕಾರ್ಯದರ್ಶಿಯಾಗಿ ಸಭೆಗಳನ್ನು ಏರ್ಪಡಿಸುವುದು, ಸಭಾ ಸೂಚನಾ ಪತ್ರಗಳನ್ನು ಹೊರಡಿಸುವುದು, ಸಭಾಸೂಚಿ ಮತ್ತು ಪ್ರಾತ್ಯಕ್ಷಿಕೆಗಳು, ಸಭಾ ನಡವಳಿ ಇತ್ಯಾದಿಗಳನ್ನು ತಯಾರಿಸುವುದಲ್ಲದೇ ಇತರ ಅಗತ್ಯ ಸಮನ್ವಯ ಕರ್ತವ್ಯಗಳನ್ನು ನಿರ್ವಹಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಹಿ. ಎ. (signature) 21/12/2020
(ಹಿದಾಯತ್ತುಲ್ಲ ಕೆ.ಎ.)
ಸರ್ಕಾರದ ಜಂಟಿ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಇವರಿಗೆ:

1. ಮಾನ್ಯ ಮುಖ್ಯಮಂತ್ರಿಗಳ ಅಪರ ಮುಖ್ಯ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು

2. ಉಪಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ ಸಚಿವರು, ಐಟಿ–ಬಿಟಿ, ವಿಜ್ಞಾನ ಹಾಗೂ ತಂತ್ರಜ್ಞಾನ ಇಲಾಖೆ ಮತ್ತು ಕೌಶಲ್ಯಾಭಿವೃದ್ಧಿ ಇಲಾಖೆರವರ ಆಪ್ತಕಾರ್ಯದರ್ಶಿ, ವಿಕಾಸ ಸೌಧ, ಬೆಂಗಳೂರು
3. ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ಆಪ್ತಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು
4. ಕಂದಾಯ ಸಚಿವರ ಆಪ್ತಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು
5. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರ ಆಪ್ತಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು
6. ಸಹಕಾರ ಸಚಿವರ ಆಪ್ತಕಾರ್ಯದರ್ಶಿ, ವಿಕಾಸ ಸೌಧ, ಬೆಂಗಳೂರು
7. ವಸತಿ ಸಚಿವರ ಆಪ್ತಕಾರ್ಯದರ್ಶಿ, ವಿಕಾಸ ಸೌಧ, ಬೆಂಗಳೂರು
8. ನಗರಾಭಿವೃದ್ಧಿ ಸಚಿವರ ಆಪ್ತಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು
9. ಆಹಾರ ಮತ್ತು ನಾಗರಿಕ ಸರಬರಾಜು ಸಚಿವರ ಆಪ್ತಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು
10. ಅಧ್ಯಕ್ಷರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರ ಆಪ್ತಕಾರ್ಯದರ್ಶಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ
11. ಸರ್ಕಾರದ ಮುಖ್ಯಕಾರ್ಯದರ್ಶಿಗಳ ಆಪ್ತಕಾರ್ಯದರ್ಶಿ
12. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು / ಅಭಿವೃದ್ಧಿ ಆಯುಕ್ತರು
13. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ಒಳಾಡಳಿತ ಇಲಾಖೆ
14. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ಅರಣ್ಯ ಇಲಾಖೆ
15. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ಆರ್ಥಿಕ ಇಲಾಖೆ
16. ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮೆಟ್ರೋ ರೈಲ್ ಕಾರ್ಪೋರೇಷನ್ ಲಿಮಿಟೆಡ್
17. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು–ನಗರಾಭಿವೃದ್ಧಿ ಇಲಾಖೆ ರವರ ಆಪ್ತಕಾರ್ಯದರ್ಶಿ
18. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ಇ–ಆಡಳಿತ
19. ಪ್ರಧಾನ ಕಾರ್ಯದರ್ಶಿಗಳು–ವಾಣಿಜ್ಯ ಮತ್ತು ಕೈಗಾರಿಕೆ
20. ಬೆಂಗಳೂರು ನಗರ ಪೋಲೀಸ್ ಆಯುಕ್ತರು
21. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ
22. ಆಡಳಿತಗಾರರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರ ಆಪ್ತಕಾರ್ಯದರ್ಶಿ
23. ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ
24. ಅಧ್ಯಕ್ಷರು, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ.
25. ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ
26. ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ
27. ವಿಶೇಷ ಆಯುಕ್ತರು (ಘನತ್ಯಾಜ್ಯ ನಿರ್ವಹಣೆ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ
28. ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್
29. ಸರ್ಕಾರದ ಕಾರ್ಯದರ್ಶಿಗಳು– ಸಣ್ಣ ನೀರಾವರಿ ಇಲಾಖೆ
30. ಸರ್ಕಾರದ ಕಾರ್ಯದರ್ಶಿಗಳು– ಲೋಕೋಪಯೋಗಿ ಇಲಾಖೆ
31. ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ
32. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ
33. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಅನುಬಂಧ - 2

# ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಅನುಬಂಧ-2)

## ಬೆಂಗಳೂರು ಮಿಷನ್-2022-ಬೆಂಗಳೂರಿಗೆ ನವಚೈತನ್ಯ ಕಾರ್ಯಕ್ರಮದಡಿಯಲ್ಲಿ ಅಭಿವೃದ್ಧಿಗೊಳ್ಳುತ್ತಿರುವ 25 ಕೆರೆಗಳ ವಿವರ

| Sl. No. | Zone | Lakes |
|---|---|---|
| 1 | East | Kelagina Byrasandra Lake |
| 2 | South | Gowdana Palya Lake |
| 3 | Bommanahalli | Gubbalala Lake |
| 4 | Bommanahalli | Yellenahalli Lake |
| 5 | Bommanahalli | Dodda Kallasandra Lake |
| 6 | Bommanahalli | Chunchghatta Lake |
| 7 | Bommanahalli | Konappana Agrahara Lake |
| 8 | Bommanahalli | Puttenahalli Lake |
| 9 | Bommanahalli | Basavanapura Lake |
| 10 | Bommanahalli | Kammanahalli Lake |
| 11 | Bommanahalli | Sarakki Lake |
| 12 | Bommanahalli | Ibblur Lake |
| 13 | Bommanahalli | Kembathahalli Lake |
| 14 | Bommanahalli | Subbarayana Lake |
| 15 | Mahadevpura | Mahadevpura-1 Lake |
| 16 | Mahadevpura | Jimke Thimmanahalli Lake |
| 17 | Mahadevpura | Siddapura Lake |
| 18 | Mahadevpura | Mahadevpura-2 Lake |
| 19 | Mahadevpura | Kannur Lake |
| 20 | Mahadevpura | Rampura Lake |
| 21 | Mahadevpura | Nagareshwara Nagenahalli Lake |
| 22 | Mahadevpura | Devasandra Lake |
| 23 | Mahadevpura | Garudacharpalya Lake |
| 24 | RR Nagar | Chikkabasthi Lake |
| 25 | RR Nagar | Thalaghattapura Lake |